# ಕರ್ನಾಟಕ ವಿಧಾನ ಪರಿಷತ್ತು

ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ : 1657

ವಿಧಾನ ಪರಿಷತ್ತಿನ ಸದಸ್ಯರ ಹೆಸರು : ಶ್ರೀ ಸಲೀಂ ಅಹಮದ್ (ಸ್ಥಳೀಯ ಸಂಸ್ಥೆಗಳ ಕ್ಷೇತ್ರ)

ಉತ್ತರಿಸಬೇಕಾದ ದಿನಾಂಕ : 14.03.2022

ಉತ್ತರಿಸುವ ಸಚಿವರು : ಅರಣ್ಯ ಮತ್ತು ಆಹಾರ, ನಾಗರಿಕ ಸರಬರಾಜು ಮತ್ತು ಗ್ರಾಹಕರ ವ್ಯವಹಾರಗಳ ಹಾಗೂ ಕಾನೂನು ಮಾಪನಶಾಸ್ತ್ರ ಇಲಾಖಾ ಸಚಿವರು.

| ಕ್ರ. ಸಂ. | ಪ್ರಶ್ನೆ | ಉತ್ತರ |
|---|---|---|
| ಅ | ಧಾರವಾಡ, ಹಾವೇರಿ, ಗದಗ ಜಿಲ್ಲೆಗಳಲ್ಲಿ ಪಡಿತರ ಕಾರ್ಡ್ ಪಡೆಯಲು ಅರ್ಜಿ ಸಲ್ಲಿಸಿರುವವರ ಸಂಖ್ಯೆ ಎಷ್ಟು; ಎಷ್ಟು ಕುಟುಂಬಗಳಿಗೆ ಕಾರ್ಡ್‌ಗಳನ್ನು ವಿತರಿಸಲಾಗಿದೆ; ಬಾಕಿ ವಿತರಿಸಬೇಕಾದ ಕಾರ್ಡ್‌ಗಳ ಸಂಖ್ಯೆ ಎಷ್ಟು; | ಧಾರವಾಡ, ಹಾವೇರಿ, ಗದಗ ಜಿಲ್ಲೆಗಳಲ್ಲಿ ಪಡಿತರ ಚೀಟಿ ಪಡೆಯಲು ಅರ್ಜಿ ಸಲ್ಲಿಸಿರುವವರ ವಿವರ ಕೆಳಕಂಡಂತಿವೆ. (ಕೆಳಗಿನ ಕೋಷ್ಟಕಗಳು) |

ಆದ್ಯತಾ ಪಡಿತರ ಚೀಟಿ

| ಕ್ರ. ಸಂ | ಜಿಲ್ಲೆಗಳು | ಸ್ವೀಕೃತವಾದ ಆದ್ಯತಾ ಅರ್ಜಿಗಳು | ಅನುಮೋದಿಸಿದ ಅರ್ಜಿಗಳು | ತಿರಸ್ಕರಿಸಿದ ಅರ್ಜಿಗಳು | ಬಾಕಿ ಉಳಿದಿರುವ ಅರ್ಜಿಗಳು |
|---|---|---|---|---|---|
| 1. | ಧಾರವಾಡ | 125122 | 76401 | 35253 | 13468 |
| 2 | ಹಾವೇರಿ | 109690 | 74531 | 22771 | 12388 |
| 3 | ಗದಗ | 62741 | 44405 | 8042 | 10294 |
| ಒಟ್ಟು | | 297553 | 195337 | 66066 | 36150 |

ಆದ್ಯತೇತರ ಪಡಿತರ ಚೀಟಿಗಳು

| ಕ್ರ.ಸಂ | ಜಿಲ್ಲೆಗಳು | ಸ್ವೀಕೃತವಾದ ಆದ್ಯತೇತರ ಅರ್ಜಿಗಳು | ಅನುಮೋದಿಸಿದ ಅರ್ಜಿಗಳು | ತಿರಸ್ಕರಿಸಿದ ಅರ್ಜಿಗಳು | ಬಾಕಿ ಉಳಿದಿರುವ ಅರ್ಜಿಗಳು |
|---|---|---|---|---|---|
| 1 | ಧಾರವಾಡ | 26345 | 23748 | 1015 | 1582 |
| 2 | ಹಾವೇರಿ | 12759 | 9058 | 971 | 2730 |
| 3 | ಗದಗ | 11173 | 7701 | 1077 | 2395 |
| ಒಟ್ಟು | | 50277 | 40507 | 3063 | 6707 |

| ಕ್ರ. ಸಂ. | ಪ್ರಶ್ನೆ | ಉತ್ತರ |
|---|---|---|
| ಆ | ನಕಲಿ ಪಡಿತರ ಕಾರ್ಡ್‌ದಾರರು ಇದ್ದಲ್ಲಿ, ಅವರ ವಿರುದ್ಧ ತೆಗೆದುಕೊಂಡಿರುವ ಕ್ರಮಗಳೇನು; | ನಕಲಿ ಪಡಿತರ ಕಾರ್ಡುದಾರರು ಇರುವುದಿಲ್ಲ. ಅನಧಿಕೃತವಾಗಿ ಅಂತ್ಯೋದಯ/ ಆದ್ಯತಾ ಪಡಿತರ ಚೀಟಿಯನ್ನು ಪಡೆದಿರುವವರಿಗೆ ನೋಟಿಸ್‌ನ್ನು ಜಾರಿ ಮಾಡಲಾಗಿದೆ ಹಾಗೂ ಅಂತಹವರಿಂದ ದಂಡವನ್ನು ವಸೂಲಿ ಮಾಡುವುದರೊಂದಿಗೆ ಕಾನೂನು ಕ್ರಮವನ್ನು ಸಹ ಜರುಗಿಸಲಾಗುತ್ತಿದೆ. |

<table>
<tr>
<td>ಇ</td>
<td>ಎಲ್ಲಾ ಪಡಿತರ ಚೀಟಿದಾರರಿಗೆ ಆಹಾರ ಸಾಮಾಗ್ರಿಗಳನ್ನು ಸಮರ್ಪಕವಾಗಿ ವಿತರಿಸಲಾಗುತ್ತಿದೆಯೇ; ಯಾವ ಯಾವ ಆಹಾರ ಪದಾರ್ಥಗಳನ್ನು ಎಷ್ಟು ಪ್ರಮಾಣದಲ್ಲಿ ನೀಡಲಾಗುತ್ತಿದೆ;</td>
<td>ಹೌದು. ಸಮರ್ಪಕವಾಗಿ ವಿತರಿಸಲಾಗುತ್ತಿದೆ.<br>ಪಡಿತರ ಚೀಟಿದಾರರಿಗೆ ವಿತರಿಸಲಾಗುತ್ತಿರುವ ಆಹಾರ ಸಾಮಾಗ್ರಿಗಳ ವಿವರ ಕೆಳಕಂಡಂತಿದೆ.
<table>
<tr><th>ಪಡಿತರ ಚೀಟಿ ವರ್ಗ</th><th>ಎನ್‌ಎಫ್‌ಎಸ್‌ಎ</th><th>ಪಿ.ಎಂ.ಜಿ.ಕೆ.ವೈ</th><th>ದರ ರೂ. ಗಳಲ್ಲಿ</th></tr>
<tr><td>ಅಂತ್ಯೋದಯ</td><td>35ಕೆ.ಜಿ ಆಹಾರ ಧಾನ್ಯ ಪ್ರತಿ ಪಡಿತರ ಚೀಟಿಗೆ</td><td>ಪ್ರತಿ ಸದಸ್ಯರಿಗೆ 5 ಕೆ.ಜಿ ಅಕ್ಕಿ</td><td rowspan="2">ಉಚಿತ</td></tr>
<tr><td>ಆದ್ಯತಾ (ಬಿಪಿಎಲ್)</td><td>5 ಕೆ.ಜಿ ಆಹಾರ ಧಾನ್ಯ ಪ್ರತಿ ಸದಸ್ಯರಿಗೆ, ಪ್ರತಿಕಾರ್ಡ್‌ಗೆ 2 ಕೆ.ಜಿ. ಗೋಧಿ</td><td>ಪ್ರತಿ ಸದಸ್ಯರಿಗೆ 5 ಕೆ.ಜಿ ಆಹಾರ ಧಾನ್ಯ</td></tr>
<tr><td>ಆದ್ಯತೇತರ (ಎಪಿಎಲ್)</td><td>ಏಕ ಸದಸ್ಯ ಪಡಿತರ ಚೀಟಿಗೆ 5 ಕೆ.ಜಿ ಅಕ್ಕಿ, ಒಬ್ಬರಿಗಿಂತ ಹೆಚ್ಚಿನ ಸದಸ್ಯರಿರುವ ಪಡಿತರ ಚೀಟಿಗೆ 10 ಕೆ.ಜಿ ಅಕ್ಕಿ</td><td></td><td>ಪ್ರತಿ ಕೆ.ಜಿ.ಗೆ ರೂ.15/- ರಂತೆ</td></tr>
</table>
</td>
</tr>
<tr>
<td>ಈ</td>
<td>ಪ್ರತಿ ಕಾರ್ಡ್‌ದಾರರಿಗೆ ಎಷ್ಟು ಪ್ರಮಾಣದಲ್ಲಿ ಅಕ್ಕಿಯನ್ನು ವಿತರಿಸಲಾಗುತ್ತಿದೆ; ಪ್ರಸ್ತುತ ನೀಡುತ್ತಿರುವ ಅಕ್ಕಿಯ ಪ್ರಮಾಣವನ್ನು ಹೆಚ್ಚಿಸುವ ಪ್ರಸ್ತಾವನೆ ಸರ್ಕಾರದ ಮುಂದಿದೆಯೇ?</td>
<td>ಲಭ್ಯತೆಗನುಗುಣವಾಗಿ ಕನಿಷ್ಠ ಬೆಂಬಲ ಬೆಲೆ ಯೋಜನೆಯಡಿ ಖರೀದಿಸಲಾಗುವ ರಾಗಿ/ಜೋಳವನ್ನು ಸಾರ್ವಜನಿಕ ವಿತರಣಾ ಪದ್ಧತಿಯಡಿ ಅಂತ್ಯೋದಯ/ಆದ್ಯತಾ ಪಡಿತರ ಫಲಾನುಭವಿಗಳಿಗೆ ವಿತರಿಸಲಾಗುತ್ತಿದೆ. ಇನ್ನುಳಿದಂತೆ ಮೇಲೆ 'ಇ' ರಲ್ಲಿ ವಿವರಿಸಿರುವ ಪ್ರಮಾಣದಲ್ಲಿ ಪಡಿತರ ಫಲಾನುಭವಿಗಳಿಗೆ ಅಕ್ಕಿಯನ್ನು ವಿತರಿಸಲಾಗುತ್ತಿದೆ.</td>
</tr>
</table>

ಆನಾಸ 55 ಡಿಆರ್‌ಎ 2022 (ಇ-ಆಫೀಸ್)

(ಉಮೇಶ ವಿ. ಕತ್ತಿ)
ಅರಣ್ಯ ಮತ್ತು ಆಹಾರ, ನಾಗರಿಕ ಸರಬರಾಜು
ಮತ್ತು ಗ್ರಾಹಕರ ವ್ಯವಹಾರಗಳ ಹಾಗೂ
ಕಾನೂನು ಮಾಪನಶಾಸ್ತ್ರ ಇಲಾಖಾ ಸಚಿವರು.